# <u>ಕರ್ನಾಟಕ ವಿಧಾನ ಪರಿಷತ್ತು</u>

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 524+514+633 |
| ಸದಸ್ಯರ ಹೆಸರು | : | ಶ್ರೀ ಸಿ.ಎಂ.ಇಬ್ರಾಹಿಂ, ಶ್ರೀ ಎಸ್.ರವಿ ಮತ್ತು ಶ್ರೀ ನಸೀರ್ ಅಹ್ಮದ್ |
| ಉತ್ತರಿಸುವ ದಿನಾಂಕ | : | 24-09-2020 |
| ಉತ್ತರಿಸುವ ಸಚಿವರು | : | ಗೃಹ ಸಚಿವರು |

<table>
<tr><th>ಕ್ರ.ಸಂ.</th><th>ವಿಷಯ</th><th>ಉತ್ತರ</th></tr>
<tr><td>(ಅ)</td><td>ಇತ್ತೀಚೆಗೆ ನಡೆದ ಡಿ.ಜೆ.ಹಳ್ಳಿ ಮತ್ತು ಕೆ.ಜಿ.ಹಳ್ಳಿ ಗಲಭೆ ಪ್ರಕರಣದಲ್ಲಿ ಇದುವರೆವಿಗೂ ಎಷ್ಟು ಮಂದಿಯನ್ನು ಬಂಧಿಸಲಾಗಿದೆ; ಸದರಿ ಗಲಭೆಗೆ ನೈಜ ಕಾರಣಗಳೇನು;</td><td>
ಇತ್ತೀಚೆಗೆ ನಡೆದ ಡಿ.ಜೆ.ಹಳ್ಳಿ ಮತ್ತು ಕೆ.ಜಿ.ಹಳ್ಳಿ ಗಲಭೆ ಪ್ರಕರಣದಲ್ಲಿ ಒಟ್ಟು 420 ಮಂದಿಯನ್ನು ಬಂಧಿಸಲಾಗಿದೆ.
<table>
<tr><th>ಕ್ರ.ಸಂ</th><th>ಪೊಲೀಸ್ ಠಾಣೆ</th><th>ಗಲಭೆಗೆ ಸಂಬಂಧಿಸಿದಂತೆ ದಾಖಲಾದ ಒಟ್ಟು ಪ್ರಕರಣಗಳು</th><th>ಪ್ರಕರಣದಲ್ಲಿ ಬಂಧಿಸಲಾದ ಆರೋಪಿಗಳ ಸಂಖ್ಯೆ</th></tr>
<tr><td>1</td><td>ಡಿ.ಜೆ.ಹಳ್ಳಿ</td><td>57</td><td>204</td></tr>
<tr><td>2</td><td>ಕೆ.ಜಿ.ಹಳ್ಳಿ</td><td>15</td><td>216</td></tr>
<tr><td></td><td>ಒಟ್ಟು</td><td>72</td><td>420</td></tr>
</table>
ಗಲಭೆಗೆ ಕಾರಣ:<br>
ದಿನಾಂಕ:11.08.2020 ರಂದು ರಾತ್ರಿ ಸುಮಾರು 09.00 ಗಂಟೆ ಸಮಯದಲ್ಲಿ 1500 ರಿಂದ 2000 ಜನರ ಉದ್ರಿಕ್ತ ಗುಂಪು ಫೇಸ್‌ಬುಕ್ ಖಾತೆಯಲ್ಲಿ ಅವಹೇಳನಕಾರಿ ಪೋಸ್ಟ್ ಹಾಕಿದ್ದು, ಪಿ.ನವೀನ್ ಎಂಬುವವರ ವಿರುದ್ಧ ಸೂಕ್ತ ಕಾನೂನು ಕ್ರಮ ಜರುಗಿಸಬೇಕೆಂದು ಆಗ್ರಹಿಸಿ ಡಿ.ಜೆ.ಹಳ್ಳಿ ಪೊಲೀಸ್ ಠಾಣೆಯ ಎದುರು ಗುಂಪು ಸೇರಿರುತ್ತಾರೆ.<br>
ಈ ಗುಂಪಿನಲ್ಲಿದ್ದ ಜನರು ಉದ್ರಿಕ್ತಗೊಂಡು ಪೊಲೀಸ್ ಠಾಣೆಯ ಮೇಲೆ ಕಲ್ಲು ತೂರಾಟ ಪ್ರಾರಂಭಿಸಿ, ಪೊಲೀಸ್ ವಾಹನಗಳಿಗೆ ಹಾಗೂ ಠಾಣೆಯ ಎದುರು ನಿಲುಗಡೆಗೊಳಿಸಲಾಗಿದ್ದ ಇತರೆ ವಾಹನಗಳಿಗೆ ಬೆಂಕಿ ಹಚ್ಚಿರುತ್ತಾರೆ. ಈ ಉದ್ರಿಕ್ತ ಗುಂಪನ್ನು ಚದುರಿಸಲು ಪೊಲೀಸರು ಪ್ರಯತ್ನಿಸಿದಾಗ ಮತ್ತೆ ಪೊಲೀಸರ ಮೇಲೆ ಕಲ್ಲು ತೂರಾಟ ನಡೆಸಿ, ಠಾಣೆಯ ಒಳಗೆ ನುಗ್ಗಿ ದಾಂಧಲೆ ನಡೆಸಿರುತ್ತಾರೆ. ಇದೇ ವೇಳೆ ಗುಂಪಿನಲ್ಲಿದ್ದ ಕೆಲವರು ಪೊಲೀಸ್ ಠಾಣೆಯ ಬೇಸ್‌ಮೆಂಟ್‌ಗೆ ನುಗ್ಗಿ ಕ್ರಿಮಿನಲ್ ಮೊಕದ್ದಮೆಗಳಲ್ಲಿ ಜಪ್ತಿ ಮಾಡಲಾಗಿದ್ದ ಮತ್ತು ಪೊಲೀಸ್ ಸಿಬ್ಬಂದಿಗಳಿಗೆ ಸೇರಿದ್ದ ಹಲವಾರು ದ್ವಿಚಕ್ರ ವಾಹನಗಳಿಗೆ ಬೆಂಕಿ ಹಚ್ಚಿದ್ದು, ಸರ್ಕಾರಿ ಮತ್ತು ಪೊಲೀಸ್ ಸಿಬ್ಬಂದಿಗೆ ಸಂಬಂಧಿಸಿದ ಸುಮಾರು 38 ವಾಹನಗಳು ಬೆಂಕಿಗೆ ಆಹುತಿಯಾಗಿದ್ದು, 19 ವಾಹನಗಳು ಜಖಂಗೊಂಡಿರುತ್ತದೆ.
</td></tr>
</table>

| | | |
|---|---|---|
| (ಆ) | ಸದರಿ ಗಲಭೆಯು ಪೂರ್ವ ನಿಯೋಜಿತವೇ, ಗಲಭೆಯು ಕೋಮುವಾದ ಗಲಭೆಯಲ್ಲವೆಂದು ಸರ್ಕಾರ ಸ್ಪಷ್ಟಪಡಿಸದಿದ್ದರೂ ಯಾವ ಕಾರಣಕ್ಕೆ ಈ ಗಲಭೆ ನಡೆದಿದೆ, ಇದರ ಹೊಣೆಗಾರರು ಯಾರು ಎಂಬ ಬಗೆಗಿನ ತನಿಖೆ ಯಾವ ಹಂತದಲ್ಲಿದೆ. | ಗಲಭೆಗೆ ಸಂಬಂಧಿಸಿದಂತೆ, ಡಿ.ಜೆ.ಹಳ್ಳಿ ಮತ್ತು ಕೆ.ಜಿ.ಹಳ್ಳಿ ಪೊಲೀಸ್ ಠಾಣೆಗಳಲ್ಲಿ ಒಟ್ಟು 72 ಪ್ರಕರಣಗಳು ದಾಖಲಾಗಿದ್ದು, ಎಲ್ಲಾ ಪ್ರಕರಣಗಳು ಇನ್ನೂ ತನಿಖಾ ಹಂತದಲ್ಲಿರುತ್ತವೆ.<br><br>ಗಲಭೆಗೆ ಸಂಬಂಧಿಸಿದಂತೆ ಯಾವುದೇ ಅಮಾಯಕರನ್ನು ಬಂಧಿಸಿರುವುದು ಕಂಡುಬಂದಿರುವುದಿಲ್ಲ. ದಾಖಲಾದ ದೂರುಗಳ ಅಂಶಗಳ ಆಧಾರದ ಮೇಲೆ ಕಲಂ ಗಳನ್ನು ಅಳವಡಿಸಿಕೊಂಡು ಪ್ರಕರಣಗಳ ತನಿಖೆ ಕೈಗೊಳ್ಳಲಾಗಿರುತ್ತದೆ.<br><br>**ಡಿ.ಜೆ.ಹಳ್ಳಿ ಪೊಲೀಸ್ ಠಾಣೆಯಲ್ಲಿ ಗಲಭೆಗೆ ಕಾರಣರಾದವರ ವಿರುದ್ಧ ಈ ಕೆಳಕಂಡಂತೆ ಪ್ರಕರಣ ದಾಖಲಿಸಲಾಗಿದೆ:**<br>➢ Section 15, 16, 18, 20 Unlawful Activity (prevention) ACT-1967<br>➢ Section 143, 147, 307, 436, 353, 332, 333, 427, 504, 506 r/w 149 IPC.<br>➢ Section 4 Prevention of Damage to Public Property Act, 1984<br>➢ Section 2 Karnataka Prevention of Destruction & Loss of Property Act 1981<br><br>**ಕೆ.ಜಿ. ಹಳ್ಳಿ ಪೊಲೀಸ್ ಠಾಣೆಯಲ್ಲಿ ಗಲಭೆಗೆ ಕಾರಣರಾದವರ ವಿರುದ್ಧ ಈ ಕೆಳಕಂಡಂತೆ ಪ್ರಕರಣ ದಾಖಲಿಸಲಾಗಿದೆ:**<br>➢ Section 15, 16, 18, 20 Unlawful Activity (prevention) ACT-1967<br>➢ Section 143, 147, 148, 307, 353, 436, 435, 427 r/w 149 IPC<br>➢ Section 3 & 4 Prevention of Damage to Public Property Act, 1984 u/s 2(A), 2(B) KPDLP ACT |
| (ಇ) | ಮೇಲಿನ ಗಲಭೆ ಪ್ರಕರಣದಲ್ಲಿ ಬಹಳಷ್ಟು ಅಮಾಯಕರನ್ನು ಕೂಡ ಬಂಧಿಸಲಾಗಿದೆ ಎಂಬ ಸ್ಥಳೀಯ ಕುಟುಂಬಗಳ ಹೇಳಿಕೆ ಬಗ್ಗೆ ಸರ್ಕಾರವು ಗಮನಿಸಿದೆಯೇ; ಹಾಗಿದ್ದಲ್ಲಿ, ಬಂಧಿತರಲ್ಲಿ ಎಷ್ಟು ಜನರನ್ನು ಅಮಾಯಕರು ಎಂದು ಬಿಡುಗಡೆ ಮಾಡಲಾಗಿದೆ; ಹಾಗೂ ಗಲಭೆಗೆ ಕಾರಣರಾದವರ ವಿರುದ್ಧ ಯಾವ ಸೆಕ್ಷನ್ ಅಡಿ ಪ್ರಕರಣ ದಾಖಲಿಸಲಾಗಿದೆ; | |
| (ಈ) | ಈ ಗಲಭೆಯಿಂದ ಸಾರ್ವಜನಿಕ ಮತ್ತು ಸರ್ಕಾರದ ಆಸ್ತಿಗಳಿಗೆ ನಷ್ಟವಾಗಿದೆಯೇ; ಹಾಗಿದ್ದಲ್ಲಿ, ಸಂಪೂರ್ಣ ವಿವರ ನೀಡುವುದು ಮತ್ತು ಇದನ್ನು ಯಾವ ರೀತಿ ಭರಿಸಲಾಗುತ್ತದೆ; ಈ ಗಲಭೆಯಿಂದ ನಷ್ಟಕ್ಕೊಳ್ಳಗಾದ ಕುಟುಂಬಗಳಿಗೆ ಪರಿಹಾರವನ್ನು ನೀಡಲಾಗಿದೆಯೇ; ಹಾಗಿದ್ದಲ್ಲಿ, ಎಷ್ಟು ಕುಟುಂಬಗಳಿಗೆ ಪರಿಹಾರ ನೀಡಲಾಗಿದೆ; (ಸಂಪೂರ್ಣ ವಿವರ ನೀಡುವುದು) | ಡಿ.ಜೆ.ಹಳ್ಳಿ ಮತ್ತು ಕೆ.ಜಿ.ಹಳ್ಳಿ ಪೊಲೀಸ್ ಠಾಣಾ ವ್ಯಾಪ್ತಿಗಳಲ್ಲಿ ನಡೆದ ಗಲಭೆಗಳಿಂದ ಸಾರ್ವಜನಿಕ ಮತ್ತು ಸರ್ಕಾರದ ಆಸ್ತಿಗಳಿಗೆ ನಷ್ಟವಾಗಿದ್ದು, ಸರ್ಕಾರಿ ಹಾಗೂ ಖಾಸಗಿ ವಾಹನಗಳು ಸೇರಿ 84 ವಾಹನಗಳು ಬೆಂಕಿಗೆ ಆಹುತಿಯಾಗಿದ್ದು, 62 ವಾಹನಗಳು ಸಂಪೂರ್ಣ ಜಖಂ ಆಗಿದ್ದು (ಒಟ್ಟು 146 ವಾಹನಗಳು) ಈ ನಷ್ಟವನ್ನು ಭರಿಸುವ ಬಗ್ಗೆ ನಷ್ಟದ ಅಂದಾಜು ಮಾಡಲು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಾದ ರಿಟ್ ಅರ್ಜಿ ಸಂಖ್ಯೆ:9287/2020 ರಲ್ಲಿನ ಆದೇಶದನ್ವಯ ಸರ್ಕಾರದ ಆದೇಶ ದಿನಾಂಕ:05.09.2020ರಲ್ಲಿ ಶ್ರೀ ಕೆಂಪಣ್ಣ, ಮಾನ್ಯ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರು ಇವರನ್ನು ಕ್ಲೈಮ್ ಕಮೀಷನರ್ ಆಗಿ ನೇಮಕ ಮಾಡಲಾಗಿರುತ್ತದೆ. |

-3

| | | |
|---|---|---|
| (ಉ) | ಈ ಗಲಭೆ ಸಮಯದಲ್ಲಿ ಕೆಲವು ಕಿಡಿಗೇಡಿಗಳು ಸಾರ್ವಜನಿಕರಿಗೆ ಸೇರಿದ ಗೃಹೋಪಯೋಗಿ ವಸ್ತುಗಳು, ದ್ವಿಚಕ್ರವಾಹನಗಳು ಹಾಗೂ ಸಾರ್ವಜನಿಕ ಆಸ್ತಿಪಾಸ್ತಿಗಳಿಗೆ ಧಕ್ಕೆ ಉಂಟು ಮಾಡಿರುವ ಅಂದಾಜು ಮೊತ್ತ ಎಷ್ಟು; ಸರ್ಕಾರ ಈ ಬಗ್ಗೆ ಏನಾದರೂ ಕ್ರಮ ಕೈಗೊಂಡು ಪರಿಹಾರ ಒದಗಿಸಲಾಗಿದೆಯೇ; (ವಿವರ ನೀಡುವುದು) | ಕ್ಲೈಮ್ ಕಮೀಷನರ್‌ಗಳು ನಷ್ಟದ ಅಂದಾಜು ಮಾಡಿ ನೀಡಲಿರುವ ವರದಿ ಆಧರಿಸಿ, ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದು. |
| (ಊ) | ಐ.ಎಂ.ಎ ಪ್ರಕರಣವು ಸದ್ಯ ಯಾವ ಹಂತದಲ್ಲಿದೆ; ವಂಚನೆಗೆ ಒಳಗಾದವರಿಗೆ ಪರಿಹಾರ ಒದಗಿಸುವ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮವೇನು? (ಸಂಪೂರ್ಣ ಮಾಹಿತಿ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಇ-ಹೆಚ್‌ಡಿ 08 ಪಿಸಿಆರ್ 2019, ಬೆಂಗಳೂರು ದಿನಾಂಕ:19.08.2019ರಲ್ಲಿ I Monetary Advisory (IMA), Bengaluru and its group entities ವಿರುದ್ಧ ಕಮರ್ಷಿಯಲ್ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ:73/2019 ಮತ್ತು ಕರ್ನಾಟಕದ ಬೇರೆ ಬೇರೆ ಪೊಲೀಸ್ ಠಾಣೆಗಳಲ್ಲಿ ದಾಖಲಾಗಿರುವ ಪ್ರಕರಣಗಳನ್ನು ಸಿಬಿಐಗೆ ವರ್ಗಾಯಿಸಲಾಗಿದೆ.<br>ವಂಚನೆಗೆ ಒಳಗಾದವರಿಗೆ ಪರಿಹಾರ ಒದಗಿಸುವುದಕ್ಕೆ ಸಂಬಂಧಪಟ್ಟಂತೆ ಕೈಗೊಳ್ಳಲಾಗುತ್ತಿರುವ ಕ್ರಮಗಳ ವರದಿಯನ್ನು **ಅನುಬಂಧ** ದಲ್ಲಿ ಒದಗಿಸಲಾಗಿದೆ. |

ಹೆಚ್‌ಡಿ 281 ಎಸ್‌ಎಸ್‌ಟಿ 2020

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು

## ಅನುಬಂಧ

- ಸರ್ಕಾರದ ರಾಜ್ಯ ಪತ್ರದಲ್ಲಿ ಪ್ರಕಟಿಸಿರುವ ಅಧಿಸೂಚನೆ ಸಂಖ್ಯೆ ಆರ್‌ಡಿ.20 ಜಿಆರ್‌ಸಿ 2017 (ಪಿ2) ಬೆಂಗಳೂರು ರ ದಿನಾಂಕ:06/08/2019, ದಿನಾಂಕ:25/09/2019, ದಿನಾಂಕ:05/12/2019 ಹಾಗೂ ದಿನಾಂಕ:02/03/2020 ರನ್ವಯ ಕರ್ನಾಟಕ ಹಣಕಾಸು ಸಂಸ್ಥೆಗಳ ಠೇವಣಿದಾರರ ಹಿತಸಂರಕ್ಷಣಾ ಕಾಯ್ದೆ ಕಲಂ 3(2) ರಡಿ ಐ.ಎಂ.ಎ ಮತ್ತು ಅದರ ಅಂಗಸಂಸ್ಥೆಗಳ ವಂಚನೆ ಪ್ರಕರಣದಲ್ಲಿ ಆರೋಪಿತರ ಸಂಬಂಧಿಸಿದ ಸ್ಥಿರಾಸ್ತಿ ಹಾಗೂ ಚರಾಸ್ತಿಗಳಿಗೆ ಸಂಬಂಧಿಸಿದಂತೆ ಮುಟ್ಟುಗೋಲು ಆದೇಶ ಹೊರಡಿಸಲಾಗಿರುತ್ತದೆ. ಅದರಂತೆ ಸಕ್ಷಮ ಪ್ರಾಧಿಕಾರವು ವಿಶೇಷ ನ್ಯಾಯಾಲಯ (ಸಿಸಿಹೆಚ್-1) ಬೆಂಗಳೂರು ಇಲ್ಲಿ ಸರ್ಕಾರದ ಅಧಿಸೂಚಿತ ಸ್ಥಿರಾಸ್ತಿಗಳು ಹಾಗೂ ಚರಾಸ್ತಿಗಳಿಗೆ ಸಂಬಂಧಿಸಿದಂತೆ ಕೆ.ಪಿ.ಐ.ಡಿ ಕಾಯ್ದೆ ಕಲಂ 5(2) ರಡಿ ಅಂತಿಮ ಮುಟ್ಟುಗೋಲು ಆದೇಶ ಪಡೆಯಲು ಪ್ರಕರಣ ದಾಖಲಿಸಿರುತ್ತದೆ. ಸದರಿ ಪ್ರಕರಣಗಳು ನ್ಯಾಯಲಯದ ವಿಚಾರಣಾ ಹಂತದಲ್ಲಿರುತ್ತದೆ.
- ಘನ ಉಚ್ಚ ನ್ಯಾಯಾಲಯದಲ್ಲಿ WP No.56649/2018 ಪ್ರಕರಣವು ದಾಖಲಾಗಿದ್ದು, ವಿಚಾರಣೆ ಹಂತದಲ್ಲಿರುತ್ತದೆ. ಹಾಗೂ ನ್ಯಾಯಾಲಯದ ಆದೇಶದನ್ವಯ ನಿಗಧಿತ ಸಮಯದಲ್ಲಿ ಸಕ್ಷಮ ಪ್ರಾಧಿಕಾರವು ತೆಗೆದುಕೊಂಡ ಕ್ರಮದ ಬಗ್ಗೆ ವರದಿಯನ್ನು (Status Report) ನ್ಯಾಯಾಲಯಕ್ಕೆ ಸಲ್ಲಿಸಲಾಗುತ್ತಿದೆ.
- ಘನ ಉಚ್ಚ ನ್ಯಾಯಾಲಯದ ಆದೇಶದನ್ವಯ ಸಿ.ಬಿ.ಐ ತನಿಖಾ ಸಂಸ್ಥೆಯ ಸಮನ್ವಯದೊಂದಿಗೆ ಸಕ್ಷಮ ಪ್ರಾಧಿಕಾರವು Forensic Audit ಕಾರ್ಯವನ್ನು ಕೈಗೊಂಡಿರುತ್ತದೆ. ಸದರಿ ಕಾರ್ಯವು ಪ್ರಗತಿಯಲ್ಲಿರುತ್ತದೆ.
- ಮಾನ್ಯ ವಿಶೇಷ ನ್ಯಾಯಾಲಯದಲ್ಲಿ ಸದರಿ ಪ್ರಕರಣವನ್ನು ತ್ವರಿತವಾಗಿ ವಿಲೇವಾರಿ ಮಾಡುವ ಅವಶ್ಯಕತೆ ಇರುವಂತೆ ಹೆಚ್ಚುವರಿ ನ್ಯಾಯಾಧೀಶರನ್ನು/ಹೆಚ್ಚುವರಿ ನ್ಯಾಯಾಲಯವನ್ನು ನಿಗಧಿಪಡಿಸಲು ಸಕ್ಷಮ ಪ್ರಾಧಿಕಾರವು ಮಾನ್ಯ ಘನ ಉಚ್ಚ ನ್ಯಾಯಾಲಯವನ್ನು ಕೋರಿರುವಂತೆ ಈ ನಿಟ್ಟಿನಲ್ಲಿ ಘನ ಉಚ್ಚ ನ್ಯಾಯಾಲಯವು ಆದೇಶ ನೀಡಿರುತ್ತದೆ.
- ಎಸ್.ಐ.ಟಿ ಹಾಗೂ ಸಿ.ಬಿ.ಐ ವರದಿಯನ್ವಯ ಈಗಾಗಲೇ ಆರೋಪಿತರಿಗೆ ಸಂಬಂಧಿಸಿದಂತೆ ಅಂದಾಜು 450 ಕೋಟಿ ಸ್ಥಿರ ಹಾಗೂ ಚರಾಸ್ತಿಗಳನ್ನು ಗುರುತಿಸಲಾಗಿರುತ್ತದೆ. ಸದರಿ ಪ್ರಕರಣದಲ್ಲಿ ಸುಮಾರು 70,000 ಕ್ಕೂ ಹೆಚ್ಚು ಠೇವಣಿದಾರರು ವಂಚನೆಗೆ ಒಳಗಾಗಿರುವುದನ್ನು ಸಕ್ಷಮ ಪ್ರಾಧಿಕಾರವು ವರದಿಯನ್ನು ಪಡೆದುಕೊಂಡಿರುತ್ತದೆ. ಇದರನ್ವಯ ಸಕ್ಷಮ ಪ್ರಾದಿಕಾರವು ಕೆ.ಪಿ.ಐ.ಡಿ ಕಾಯ್ದೆ ಕಲಂ 7(2) ರಡಿ ಆನ್ ಲೈನ್ ಮುಖಾಂತರ ಅರ್ಜಿಗಳನ್ನು ಕರೆಯಲು ತೀರ್ಮಾನಿಸಿದ್ದು, ಅದರಂತೆ ಸಾರ್ವಜನಿಕರಿಂದ ಕ್ಲೇಮು ಅರ್ಜಿಗಳನ್ನು ಸ್ವೀಕರಿಸುವ ಮುಂಚಿತವಾಗಿ ಸಾರ್ವಜನಿಕರಿಂದ ಪ್ರತಿಕ್ರಿಯೆಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ) ಸಹಯೋಗದೊಂದಿಗೆ ಆನ್ ಲೈನ್ ಟೆಸ್ಟ್ ಅಪ್ಲಿಕೇಷನ್ ನ್ನು ಸಿದ್ಧಪಡಿಸಿ, ದಿನಾಂಕ:05/03/2020 ರಂದು ವೆಬ್‌ಸೈಟ್ "imaclaims.karnataka.gov.in" ಚಾಲನೆ ಮಾಡಿ, ಸಾರ್ವಜನಿಕರ ಮಾಹಿತಿಗಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿ ಸಹಾಯ ಕೇಂದ್ರ ದೂರವಾಣಿ (ಸಂಖ್ಯೆ 080-46885959) ನ್ನು ಪ್ರಾರಂಭಿಸಲಾಗಿರುತ್ತದೆ. ಇದರೊಂದಿಗೆ ವಾಟ್ಸ್‌ಆಪ್ ಸೇವೆ ಸಂಖ್ಯೆ 797556880 ಹಾಗೂ ಇ-ಮೇಲ್ splocaima20@gmail.com ಸೇವೆಯನ್ನು ಪ್ರಾರಂಭಿಸಲಾಗಿರುತ್ತದೆ. ಅರ್ಜಿದಾರರು/ಹೂಡಿಕೆದಾರರ KYC ಪ್ರಮಾಣಿತ ಬ್ಯಾಂಕ್ ಖಾತೆಯಿಂದ ಸಕ್ಷಮ ಪ್ರಾಧಿಕಾರಿಯವರ ಬ್ಯಾಂಕ್ ಖಾತೆಗೆ ರೂ.01 ನ್ನು ವರ್ಗಾಯಿಸಿಕೊಳ್ಳುವ ಮೂಲಕ ಹೂಡಿಕೆದಾರರನ್ನು ಖಾತ್ರಿಪಡಿಸಿಕೊಳ್ಳುವ ಪ್ರಕ್ರಿಯೆಯು ಪ್ರಗತಿಯಲ್ಲಿರುತ್ತದೆ.
- ಹೂಡಿಕೆದಾರರಿಂದ ಕ್ಲೇಮು ಅರ್ಜಿಗಳನ್ನು ಸ್ವೀಕರಿಸುವ ಪ್ರಕ್ರಿಯೆಯನ್ನು ಸರಳೀಕರಣಗೊಳಿಸಲು, ದಾಖಲೆಗಳ ಪುನರಾವರ್ತಿತ ಸಲ್ಲಿಕೆ ತಡೆಗಟ್ಟಲು, ನೈಜ ಫಲಾನುಭವಿಗಳನ್ನು ಗುರುತಿಸಲು ಸಂಬಂಧಪಟ್ಟವರಿಂದ ಆಧಾರ್ ಮಾಹಿತಿಯನ್ನು ಸ್ವ-ಇಚ್ಛೆಯಿಂದ ಪಡೆದು ಆನ್‌ಲೈನ್ ಕ್ಲೇಮ್ ತಂತ್ರಾಂಶಕ್ಕೆ ಜೋಡಣೆ ಮಾಡುವ ಕುರಿತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ) ಮುಖಾಂತರ ಕೇಂದ್ರ ಸರ್ಕಾರದ

ಅನುಮತಿ ಪಡೆಯುವ ಕಾರ್ಯ ಪ್ರಗತಿಯಲ್ಲಿರುತ್ತದೆ. ಈ ಸಂಬಂಧ ರಿಟ್ ಅರ್ಜಿ ಸಂಖ್ಯೆ.56649/2018 ರಲ್ಲಿ ದಿನಾಂಕ:05.03.2020 ಮಧ್ಯಂತರ ಆದೇಶದಲ್ಲಿ ಕರ್ನಾಟಕ ಘನ ಉಚ್ಚ ನ್ಯಾಯಾಲಯವು ಆಧಾರ ಜೋಡಣೆ ಪ್ರಕ್ರಿಯೆಗೆ ತ್ವರಿತವಾಗಿ ಅನುಮತಿ ಪಡೆಯುವ ಕುರಿತು Assistant Solicitor General ರವರ ಮುಖಾಂತರ ಕೇಂದ್ರ ಸರ್ಕಾರಕ್ಕೆ ಕೋರಿಕೆ ಸಲ್ಲಿಸಲು ನಿರ್ದೇಶನ ನೀಡಿರುತ್ತದೆ.

- ಠೇವಣಿದಾರರ ಹಿತದೃಷ್ಟಿಯಿಂದ ಅವಶ್ಯಕತೆ ಇದ್ದಲ್ಲಿ, ಇ-Attestation ಮುಖಾಂತರ ದಾಖಲಾತಿಗಳನ್ನು ಧೃಡೀಕರಿಸುವ ಬಗ್ಗೆ ಪ್ರಸ್ತಾವನೆಯನ್ನು ಕಾನೂನು ಕೋಶಕ್ಕೆ ಸಲ್ಲಿಸಿದ್ದು, ಕಾರ್ಯ ಪ್ರಗತಿಯಲ್ಲಿರುತ್ತದೆ ಹಾಗೂ ತಹಶೀಲ್ದಾರರನ್ನು ಈ ಕಾರ್ಯಕ್ಕೆ Designated ಅಧಿಕಾರಿಗಳನ್ನಾಗಿ ನೇಮಕ ಮಾಡಲಾಗಿದೆ.

- ಠೇವಣಿದಾರರ ಆನ್ ಲೈನ್ ಅಪ್ಲಿಕೇಷನ್ ಸ್ವೀಕರಿಸುವ ಸಂದರ್ಭದಲ್ಲಿ ಅನುಕೂಲ ಆಗುವ ನಿಟ್ಟಿನಲ್ಲಿ ಠೇವಣಿದಾರರ ಮೊಬೈಲ್ ಸಂಖ್ಯೆಯನ್ನಾಧರಿಸಿ ಎಸ್.ಎಂ.ಎಸ್ ಮುಖಾಂತರ ಹಾಗೂ ದೂರವಾಣಿ ಮುಖಾಂತರ ಮಾಹಿತಿಯನ್ನು ಒದಗಿಸಲು ಸಕಾಲ ಕಾಲ್‌ಸೆಂಟರ್ ಸರ್ವೀಸ್‌ನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ(ಇ-ಆಡಳಿತ) ಮುಖಾಂತರ ಬಳಸಿಕೊಳ್ಳುವ ಕಾರ್ಯ ಪ್ರಗತಿಯಲ್ಲಿರುತ್ತದೆ.

- ಠೇವಣಿದಾರರಿಂದ ಅರ್ಜಿಗಳನ್ನು ಸ್ವೀಕರಿಸಲು ಕೆ.ಪಿ.ಐ.ಡಿ ಕಾಯ್ದೆ 7(2) ರಡಿ ಒಂದು ತಿಂಗಳ ಕಾಲಾವಕಾಶ ಇರುವುದರಿಂದ ಠೇವಣಿದಾರರ ಅನುಕೂಲಕ್ಕಾಗಿ ಹೆಚ್ಚುವರಿ ಕೇಂದ್ರಗಳಲ್ಲಿ ಆನ್‌ಲೈನ್ ಅರ್ಜಿಗಳನ್ನು ಸ್ವೀಕರಿಸಲು ಬೆಂಗಳೂರು-1, ಕರ್ನಾಟಕ-1 ಹಾಗೂ ಸೇವಾ ಸಿಂಧು ಕೇಂದ್ರಗಳ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ) ಮೂಲಕ ಕೋರಲಾಗಿದ್ದು ಕಾರ್ಯಪ್ರಗತಿಯಲ್ಲಿರುತ್ತದೆ.

- ಸದರಿ ವಂಚನೆ ಪ್ರಕರಣದಲ್ಲಿ ತನಿಖಾ ಸಂಸ್ಥೆಯಾದ ಸಿ.ಬಿ.ಐ ರವರು ನೀಡಿದ ವರದಿಯನ್ವಯ ತಮಿಳುನಾಡು ರಾಜ್ಯ ಚೆನ್ನೈನಲ್ಲಿ ಐ.ಎಂ.ಎ ಸ್ವಾಮ್ಯದ ರೂ. 89,07,230/- ಮೌಲ್ಯವುಳ್ಳ ಪೀಠೋಪಕರಣಗಳನ್ನು ಹಾಗೂ 03 ವಾಹನಗಳನ್ನು ಅಮಾನತ್ತು ಪಡಿಸಿರುವ ಬಗ್ಗೆ ಈ ಸಕ್ಷಮ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿದ್ದು, ಸದರಿ ವರದಿಯನ್ವಯ ದಿನಾಂಕ:30.05.2020, ತಿದ್ದುಪಡಿ ಅಧಿಸೂಚನೆ ದಿನಾಂಕ:03.08.2020 ರಂದು ಸರ್ಕಾರವು ಕೆ.ಪಿ.ಐ.ಡಿ ಕಾಯ್ದೆ ಕಲಂ 3(2) ರಡಿ ಮಧ್ಯಂತರ ಮುಟ್ಟುಗೋಲು ಅಧಿಸೂಚನೆಯನ್ನು ಹೊರಡಿಸಿರುತ್ತದೆ. ಸದರಿ ಅಧಿಸೂಚನೆಗಳನ್ನು ದಿನಾಂಕ:16.07.2020 ಹಾಗೂ ದಿನಾಂಕ:06.08.2020 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ದಿನಾಂಕ:26.08.2020 ರಂದು ಸಾರ್ವಜನಿಕರ ಮಾಹಿತಿಗಾಗಿ ದಿನಪತ್ರಿಕೆಗಳಲ್ಲಿ ಪ್ರಚುರಪಡಿಸಿರುತ್ತದೆ. ಸದರಿ ಅಧಿಸೂಚನೆಗಳು, ರಾಜ್ಯಪತ್ರ ಪ್ರತಿ, ಹಾಗೂ ಪತ್ರಿಕಾ ಪ್ರಕಟಣೆಗಳನ್ನು ದಿನಾಂಕ:04.09.2020 ರಂದು ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುತ್ತದೆ. ಅದರಂತೆ, ಮಧ್ಯಂತರ ಮುಟ್ಟುಗೋಲು ಆದೇಶವನ್ನು ಖಾಯಂಗೊಳಿಸಿ ಸದರಿ ಪೀಠೋಪಕರಣ ಹಾಗೂ ವಾಹನಗಳನ್ನು ಹರಾಜು ಮಾಡಲು ಆದೇಶ ಕೋರಿ ಕೆ.ಪಿ.ಐ.ಡಿ ಕಾಯ್ದೆ ಕಲಂ 5(2) ರಡಿ ಮಾನ್ಯ ವಿಶೇಷ ನ್ಯಾಯಾಲಯದಲ್ಲಿ ಪ್ರಕರಣಗಳನ್ನು ದಾಖಲಿಸಲು ಸಕ್ಷಮ ಪ್ರಾಧಿಕಾರದಿಂದ ಕ್ರಮ ವಹಿಸಲಾಗುತ್ತಿದೆ.

- ಐ.ಎಂ.ಎ ಹಾಗೂ ಅದರ ಅಂಗಸಂಸ್ಥೆಗಳ ವಂಚನೆ ಪ್ರಕರಣದಲ್ಲಿ ಈ ಹಿಂದಿನ ತನಿಖಾ ಸಂಸ್ಥೆಯಾಗಿದ್ದ ಎಸ್.ಐ.ಟಿ ರವರು ಐ.ಎಂ.ಎ ಸೌಮ್ಯದ 30 ಬಾಡಿಗೆ/ಭೋಗ್ಯದ ಕಟ್ಟಡಗಳಲ್ಲಿನ ಚರ/ಸ್ಥಿರ ಆಸ್ತಿಗಳನ್ನು ಅಮಾನತ್ತು ಪಡಿಸಿ ಈ ಸಕ್ಷಮ ಪ್ರಾಧಿಕಾರಕ್ಕೆ ದಿನಾಂಕ:18.10.2019 ರಂದು ವರದಿ ಸಲ್ಲಿಸಿರುವಂತೆ ಸದರಿ 30 ಬಾಡಿಗೆ/ಭೋಗ್ಯದ ಕಟ್ಟಡದ ಮಳಿಗೆಯಲ್ಲಿರುವ ಚರ/ಸ್ಥಿರ ಆಸ್ತಿಗಳನ್ನು ದಿನಾಂಕ: 04.08.2020 ರಂದು ಸರ್ಕಾರವು ಕೆ.ಪಿ.ಐ.ಡಿ ಕಾಯ್ದೆ ಕಲಂ 3(2) ರಡಿ ಮಧ್ಯಂತರ ಮುಟ್ಟುಗೋಲು ಅಧಿಸೂಚನೆಯನ್ನು ಹೊರಡಿಸಿ, ದಿನಾಂಕ:06.08.2020 ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ದಿನಾಂಕ:29.08.2020 ರ ಕನ್ನಡ ಮತ್ತು ಇಂಗ್ಲೀಷ್ ದಿನಪತ್ರಿಕೆಗಳಲ್ಲಿ ಪ್ರಚುರಪಡಿಸಿರುತ್ತದೆ. ಅದರಂತೆ ಮಧ್ಯಂತರ ಮುಟ್ಟುಗೋಲು ಆದೇಶವನ್ನು ಖಾಯಂಗೊಳಿಸಿ ಸದರಿ ಮಳಿಗೆಗಳಲ್ಲಿನ ಚರ/ಸ್ಥಿರ ಆಸ್ತಿಗಳನ್ನು ಹರಾಜು ಮಾಡಲು ಹಾಗೂ

ಕಟ್ಟಡದ ಮಾಲೀಕರುಗಳು ಐ.ಎಂ.ಎ ಸಂಸ್ಥೆಯಿಂದ ಪಡೆದುಕೊಂಡಿರುವ ಭದ್ರತಾ ಠೇವಣಿ ಮೊತ್ತವನ್ನು ವಿಶೇಷಾಧಿಕಾರಿ ಹಾಗೂ ಸಕ್ಷಮ ಪ್ರಾಧಿಕಾರಿಯವರ ವಿಧಾನಸೌಧ ಶಾಖೆಯಲ್ಲಿನ ಎಸ್.ಬಿ.ಐ ಬ್ಯಾಂಕ್ ಉಳಿತಾಯ ಖಾತೆ ಸಂಖ್ಯೆ 38647065778 ಕ್ಕೆ ಪಾವತಿಸಲು ಆದೇಶ ಕೋರಿ ಕೆ.ಪಿ.ಐ.ಡಿ ಕಾಯ್ದೆ ಕಲಂ 5(2) ರಡಿ ಮಾನ್ಯ ವಿಶೇಷ ನ್ಯಾಯಾಲಯದಲ್ಲಿ ಪ್ರಕರಣಗಳನ್ನು ಈ ಪ್ರಾಧಿಕಾರದಿಂದ ದಾಖಲಿಸಲಾಗುತ್ತಿದೆ.

- ವಿಶೇಷಾಧಿಕಾರಿ ಹಾಗೂ ಸಕ್ಷಮ ಪ್ರಾಧಿಕಾರದ ಹುದ್ದೆ ಪ್ರಾದೇಶಿಕ ಆಯುಕ್ತರ ಹುದ್ದೆಯಿಂದ ಬೇರ್ಪಟ್ಟು ಹೊಸ ಹುದ್ದೆಯು ಸೃಜನೆಯಾಗಿರುವಂತೆ ಕೆ.ಸಿ.ಎಸ್.ಆರ್ ನಿಯಮಕ್ಕೆ ಸೇರ್ಪಡೆ, ಕಛೇರಿ ಸ್ಥಳ ಹಂಚಿಕೆ ಮಾಡಿರುವಂತೆ ಕಛೇರಿ ಕಾರ್ಯನಿರ್ವಹಣೆಗೆ ಸೂಕ್ತವಾಗುವಂತೆ ಶೀಘ್ರದಲ್ಲಿ ನವೀಕರಿಸಲು ಅನುದಾನ ಬಿಡುಗಡೆ ಮಾಡುವುದು, ಅವಶ್ಯವಿರುವಂತಹ ಅಧಿಕಾರಿ/ಸಿಬ್ಬಂದಿಗಳನ್ನು ನಿಯೋಜಿಸುವುದು ಮಾನ್ಯ ಉಚ್ಛ ನ್ಯಾಯಾಲಯದ ದಿನಾಂಕ:05/03/2020 ರ ಆದೇಶದನ್ವಯ ತ್ವರಿತವಾಗಿ ಸೌಲಭ್ಯಗಳನ್ನು ಒದಗಿಸುವುದು ಹಾಗೂ ಹೆಚ್ಚುವರಿ ಅಫಿಡವಿಟ್ ಸಲ್ಲಿಸುವ ವಿಷಯವನ್ನು ಸರ್ಕಾರದ ಹಂತದಲ್ಲಿ ಕ್ರಮಕೈಗೊಳ್ಳಬೇಕಾಗಿರುತ್ತದೆ.
- ಐ.ಎಂ.ಎ ಮತ್ತು ಅದರ ಅಂಗಸಂಸ್ಥೆಗಳ ವಂಚನೆ ಪ್ರಕರಣದಲ್ಲಿ ಭಾಗಿಯಾಗಿರುವ ಆರೋಪಿತರ ಹೆಚ್ಚುವರಿ ಸ್ಥಿರ ಮತ್ತು ಚರಾಸ್ಥಿಗಳು ಪತ್ತೆಯಾಗಿ ಸರ್ಕಾರವು ಕೆ.ಪಿ.ಐ.ಡಿ ಕಾಯ್ದೆ ಕಲಂ 3(2) ರಡಿ ಮುಟ್ಟುಗೋಲು ಅಧಿಸೂಚನೆ ಹೊರಡಿಸಿ ಈ ಪ್ರಾಧಿಕಾರಕ್ಕೆ ಕ್ರಮಕೈಗೊಳ್ಳಲು ಸೂಚಿಸಿದಲ್ಲಿ ಕೆ.ಪಿ.ಐ.ಡಿ ಕಲಂ 5(2) ರಡಿ ಮಾನ್ಯ ವಿಶೇಷ ನ್ಯಾಯಾಲಯದ ಅಂತಿಮ ಆದೇಶ ಪಡೆದು ಕೆ.ಪಿ.ಐ.ಡಿ ಕಾಯ್ದೆ ಕಲಂ 7(2) ರಂತೆ ಹೂಡಿಕೆದಾರರಿಗೆ ಹಣ ಹಿಂದಿರುಗಿಸುವ ಕ್ರಮವನ್ನು ಸಕ್ಷಮ ಪ್ರಾಧಿಕಾರವು ಕೈಗೊಳ್ಳುತ್ತದೆ.

* * * *